check

**ಕರ್ನಾಟಕ ವಿಧಾನ ಪರಿಷತ್ತು**

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಮಾನೆ ಶ್ರೀನಿವಾಸ<br>(ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 197 |
| ಉತ್ತರಿಸಬೇಕಾದ ದಿನಾಂಕ | : | 11/03/2020 |
| ಉತ್ತರಿಸಬೇಕಾದ ಸಚಿವರು | : | ಶ್ರೀ ವಿ. ಸೋಮಣ್ಣ, ವಸತಿ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | 2017-2018ನೇ ಸಾಲಿನಲ್ಲಿ ನಗರ ವಾಜಪೇಯಿ ನಿವೇಶನ ಯೋಜನೆಯಡಿ ಹಾನಗಲ್ ನಗರದ ಪುರಸಭೆ ವ್ಯಾಪ್ತಿಯ ಸ.ನಂ. 649ರಲ್ಲಿ ರಚಿಸಿದ 138 ನಿವೇಶನಗಳನ್ನು ಆಶ್ರಯ ಸಮಿತಿಯಲ್ಲಿ ಸರ್ಕಾರದ ಮಾರ್ಗಸೂಚಿಯಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸುಮಾರು 33 ಫಲಾನುಭವಿಗಳಿಗೆ ಹಾಗೂ ಇತರೆ ಜಾತಿಯ 105 ಫಲಾನುಭವಿಗಳಿಗೆ ಆಯ್ಕೆ ಮಾಡಿದ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ ? | ಸರ್ಕಾರದ ಗಮನಕ್ಕೆ ಬಂದಿದೆ. ಸದರಿ ಫಲಾನುಭವಿಗಳಿಗೆ ಈವರೆಗೂ ಪಟ್ಟಾ ನೀಡಿರುವುದಿಲ್ಲ.<br>ಹಾನಗಲ್ ಪುರಸಭೆ ವ್ಯಾಪ್ತಿಯ ಸ.ನಂ. 649ರ 5.00 ಎಕರೆ ಸರ್ಕಾರಿ ಜಮೀನಿನಲ್ಲಿ 33 ಕೆ.ವಿ. ಹಾಗೂ 11 ಕೆ.ವಿ. ಮತ್ತು ಇನ್ನಿತರ ವಿದ್ಯುತ್ ಮಾರ್ಗಗಳನ್ನು ಜಮೀನಿನಿಂದ ಬೇರೆಡೆಗೆ ಸ್ಥಳಾಂತರ ಮಾಡಿ ಸಮತಟ್ಟು ಗೊಳಿಸಿ, ವಿನ್ಯಾಸಗೊಳಿಸಲು ಒಟ್ಟು 68.00 ಲಕ್ಷ ರೂಪಾಯಿಗಳ ವಿವರವಾದ ಯೋಜನಾ ವರದಿಯನ್ನು ತಯಾರಿಸಿ ಅನುದಾನ ಬಿಡುಗಡೆಗಾಗಿ ಹಾವೇರಿ ಜಿಲ್ಲಾಧಿಕಾರಿಗಳಿಂದ ರಾಜೀವ್ ಗಾಂಧಿ ವಸತಿ ನಿಗಮಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿರುತ್ತದೆ. |
| (ಆ) | ಸರ್ಕಾರದ ಮಾರ್ಗಸೂಚಿಯ ಅನ್ವಯ ಆಯ್ಕೆಗೊಂಡಂತಹ ಫಲಾನುಭವಿಗಳಿಗೆ ಪಟ್ಟಾ ಹಾಗೂ ನಿವೇಶನವನ್ನು ನೀಡಲಾಗಿದೆಯೇ ; | ವಾಜಪೇಯಿ ನಗರ ನಿವೇಶನ ಯೋಜನೆಯ ಮಾರ್ಗಸೂಚಿಗಳ ಪ್ರಕಾರ ಒಂದು ನಿವೇಶನಕ್ಕೆ 2,000/- ರೂಪಾಯಿಯಂತೆ 200 ನಿವೇಶನಗಳಿಗೆ ಒಟ್ಟು 4,00,000/- ರೂಪಾಯಿಗಳ ಅನುದಾನವನ್ನು ಬಿಡುಗಡೆಗೊಳಿಸಲು ಮಾತ್ರ ಅವಕಾಶವಿದ್ದು ಅದರಂತೆ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ. ಉಳಿದ ಅನುದಾನವನ್ನು ನಗರ ಸ್ಥಳೀಯ ಸಂಸ್ಥೆ ನಿಧಿಯಿಂದ ಅನುದಾನ ಹೊಂದಾಣಿಕೆ ಮಾಡಿಕೊಳ್ಳಬೇಕಾಗಿರುತ್ತದೆ. |
| (ಇ) | ಪಟ್ಟಾ ಹಾಗೂ ನಿವೇಶನ ನೀಡುವಲ್ಲಿ ವಿಳಂಬಕ್ಕೆ ಕಾರಣಗಳೇನು; | |
| (ಈ) | ಫಲಾನುಭವಿಗಳಿಗೆ ಪಟ್ಟಾ ಹಾಗೂ ನಿವೇಶನ ನೀಡಲು ಸರ್ಕಾರ ಕೈಗೊಳ್ಳುವ ಕ್ರಮಗಳೇನು; ಹಾಗೂ ಯಾವ ಕಾಲಮಿತಿಯೊಳಗೆ ಪಟ್ಟಾ ಹಾಗೂ ನಿವೇಶನ ನೀಡಲಾಗುವುದು? (ಮಾಹಿತಿಯನ್ನು ಒದಗಿಸುವುದು) | ದಿನಾಂಕ: 14.03.2018 ರಲ್ಲಿ ಸಾರ್ವಜನಿಕರು ರಾಜೀವ್ ಗಾಂಧಿ ವಸತಿ ನಿಗಮಕ್ಕೆ ಸಲ್ಲಿಸಿದ ಮನವಿಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಜಮೀನಿನಲ್ಲಿ ನಿವೇಶನಗಳ ರಚನೆ ಮತ್ತು ಅಭಿವೃದ್ಧಿಯನ್ನು ಕೈಬಿಡುವಂತೆ ಕೋರಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸದರಿ ವಿಷಯದ ಬಗ್ಗೆ ಪರಿಶೀಲಿಸಿ ಸೂಕ್ತ ಕ್ರಮವಹಿಸಲು ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರಿಗೆ ಸೂಚಿಸಲಾಗಿದ್ದು, ಅದರಂತೆ ಸದರಿ ಜಮೀನಿನಲ್ಲಿ ನಿವೇಶನ ರಚನೆ ಮತ್ತು ಅಭಿವೃದ್ಧಿಗೆ ಸಂಬಂಧಪಟ್ಟಂತೆ ಸಾರ್ವಜನಿಕರಿಂದ ಅಭಿಪ್ರಾಯ ಪಡೆದು, ಜಮೀನು ಅಭಿವೃದ್ಧಿಪಡಿಸಿ, ಪಟ್ಟಾ ಹಾಗೂ ನಿವೇಶನ ನೀಡಲು ಜಿಲ್ಲಾಧಿಕಾರಿಗಳು, ಹಾವೇರಿ ರವರ ಮೂಲಕ ಕ್ರಮವಹಿಸಲಾಗುವುದು. |

ವಇ 55 ಹೆಚ್‌ಎಎಂ 2020 (236373)

(ವಿ. ಸೋಮಣ್ಣ)
ವಸತಿ ಸಚಿವರು.